

# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ಗುರುತಿನ ಪ್ರಶ್ನೆ

ದಿನಾಂಕ : 04-03-2021 ಪ್ರಶ್ನೆ ಸಂಖ್ಯೆ : 104 (666)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ. ಎ. ತಿಪ್ಪೇಸ್ವಾಮಿ(ನಾಮನಿರ್ದೇಶನ ಹೊಂದಿದವರು )

ಉತ್ತರ ನೀಡಬೇಕಾದ ದಿನಾಂಕ : 04-03-2021

ಉತ್ತರಿಸುವ ಸಚಿವರು: ಮುಖ್ಯಮಂತ್ರಿಗಳು

ವಿಷಯ : ಜಿ.ಎಸ್.ಟಿ. ಕೊರತೆ ಬಗ್ಗೆ

(ಅ) ಜಿಎಸ್‌ಟಿ ತೆರಿಗೆ ವಸೂಲಾತಿಯಲ್ಲಿ ಕೊರತೆ ಆಗಿರುವ ಹಿನ್ನೆಲೆಯಲ್ಲಿ ಜಿಎಸ್‌ಟಿ ಪರಿಹಾರ ರೂಪದಲ್ಲಿ 2017 ರಿಂದ ಇಲ್ಲಿಯವರೆಗೂ ಕೇಂದ್ರ ಸರ್ಕಾರ ಕರ್ನಾಟಕ ರಾಜ್ಯಕ್ಕೆ ನೀಡಬೇಕಾಗಿರುವ ಪರಿಹಾರವೆಷ್ಟು; (ವರ್ಷವಾರು ನೀಡಬೇಕಾಗಿರುವ ಪರಿಹಾರ, ಬಿಡುಗಡೆ ಮಾಡಿರುವ ಪರಿಹಾರ ಮತ್ತು ಉಳಿಕೆ ಮೊತ್ತದ ವಿವರ ನೀಡುವುದು)

(ಆ) ವರ್ಷಾವಾರು ಜಿಎಸ್‌ಟಿ ತೆರಿಗೆ ವಸೂಲಾತಿಯಲ್ಲಿ ರಾಜ್ಯ ಸರ್ಕಾರ ಕೊರತೆ ಅನುಭವಿಸುತ್ತಿರುವುದು ಮತ್ತು ಇದರಿಂದ ಕೇಂದ್ರ ಸರ್ಕಾರದಿಂದ ಪರಿಹಾರ ರೂಪದಲ್ಲಿ ನೀಡಬೇಕಾಗಿರುವ ಮೊತ್ತ ಏರಿಕೆ ಆಗುತ್ತಿರುವುದು ನಿಜವೇ; ಹಾಗಿದ್ದಲ್ಲಿ, ಈ ಕೊರತೆಯನ್ನು ತುಂಬಿಸಲು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು)

(ಇ) ಒಂದು ವೇಳೆ ಕೇಂದ್ರ ಸರ್ಕಾರ ಜಿಎಸ್‌ಟಿ ತೆರಿಗೆ ಸಂಗ್ರಹ ಕೊರತೆಯನ್ನು ಜಿಎಸ್‌ಟಿ ಸೆಸ್ ಕಾಯ್ದೆ ಅಡಿಯಲ್ಲಿ ಸರಿದೂಗಿಸಲು ಅಸಾಧ್ಯವಾದಲ್ಲಿ ಕೇಂದ್ರ ಸರ್ಕಾರ ಪರ್ಯಾಯವಾಗಿ ರೂಪಿಸಿರುವ ಯೋಜನೆಯೇನು ಮತ್ತು ಈ ಪರ್ಯಾಯ ಯೋಜನೆ ಹೊರತುಪಡಿಸಿ, ಈ ಕೊರತೆಯನ್ನು ತುಂಬಿಸಲು ರಾಜ್ಯ ಸರ್ಕಾರ ರೂಪಿಸಿರುವ ಯೋಜನೆಗಳಾವುವು;

(ಈ) ಹಿಂದಿನ ಆಯ-ವ್ಯಯದಲ್ಲಿ ಅಳವಡಿಕೆಯಾಗಿ ಮುಂದುವರೆದ ಮತ್ತು ಮುಂದಿನ ಆಯ-ವ್ಯಯಗಳಲ್ಲಿ ಕಲ್ಪಿಸಬೇಕಾಗಿರುವ ಮೂಲಭೂತ ಸೌಕರ್ಯಗಳಿಗೆ ಅನುದಾನವನ್ನು ಯಾವ ರೀತಿ ಸಂಪನ್ಮೂಲಗಳಿಂದ ಕ್ರೋಢೀಕರಿಸಲಾಗುವುದು? (ವಿವರ ಒದಗಿಸುವುದು)